ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಕೋವಿಡ್-19 ನಿರ್ವಹಣೆಗೆ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನದ ಬಗ್ಗೆ

ಶ್ರೀ ಗೋವಿಂದ ರಾಜು(ವಿಧಾನಸಭೆಯಿಂದ ಚುನಾಯಿತರಾದವರು) -

134 (76) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕೋವಿಡ್-19 ನಿರ್ವಹಣೆಗೆ ಕೋಲಾರ ಜಿಲ್ಲೆಗೆ ಮಾರ್ಚ್-2020 ರಿಂದ ಇದುವರೆವಿಗೂ ಬಿಡುಗಡೆಯಾಗಿರುವ ಮೊತ್ತವೆಷ್ಟು; ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಹಾಗೂ ದಾನಿಗಳು ನೀಡಿರುವ ಮೊತ್ತದ ಸಂಪೂರ್ಣ ಮಾಹಿತಿ ನೀಡುವುದು;

(ಆ) ಈ ಮೊತ್ತವನ್ನು ಎಲ್ಲಾ ವಿಧಾನ ಸಭಾ ಕ್ಷೇತ್ರಗಳಿಗೂ ಸಮಾನವಾಗಿ ಹಂಚಿಕೆ ಮಾಡಲಾಗಿದೆಯೇ;

(ಇ) ಈ ಮೊತ್ತವನ್ನು ಖರ್ಚು ಮಾಡುವ ಅಧಿಕಾರವನ್ನು ಯಾವ ಯಾವ ಇಲಾಖೆಯ ಅಧಿಕಾರಿಗಳಿಗೆ ನೀಡಲಾಗಿದೆ;

(ಈ) ಒಬ್ಬ ಕೋವಿಡ್-19 ರೋಗಿಗೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಹಾಗೂ ದಾನಿಗಳು ನೀಡುವ ಮೊತ್ತವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

(ಉ) ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಹಾಗೂ ದಾನಿಗಳು ನೀಡಿರುವ ಒಟ್ಟು ಮೊತ್ತದಲ್ಲಿ ಇದುವರೆವಿಗೂ ವೆಚ್ಚವಾಗಿರುವ ಮೊತ್ತವೆಷ್ಟು? (ಸಂಪೂರ್ಣ ಮಾಹಿತಿ ನೀಡುವುದು)